ಡಾ|| ಬಾ. ರಾ. ಗೋಪಾಲ*

# ಹಂಪಿಯಲ್ಲಿ ಶ್ರೀ ವೈಷ್ಣವ ಆಳ್ವಾರುಗಳು

ಸುಮಾರು ದಶಕದ ಹಿಂದೆ, ಹಂಪಿಯ ವಿಠಲನ ಗುಡಿಯ ಸಮೀಪದಲ್ಲಿ ಪುರಂದರ ಮಂಟಪದ ಸಮೀಪ ಕಂಡುಬಂದ ಒಂದು ವಿಗ್ರಹ ಪುರಂದರರ ಪ್ರತಿಕೃತಿಯಾಗಿದ್ದಿತೆಂಬ ಪ್ರಕಟಣೆ ಬಂದ ಬಳಿಕ, ಅದು ಶ್ರೀ ವೈಷ್ಣವ ಆಳ್ವಾರರಲ್ಲಿ ಒಬ್ಬನಾಗಿರಬಹುದೆಂಬ ಸೂಚನೆಯೂ ಬಂದಿತು. ಈ ಹಿನ್ನೆಲೆಯಲ್ಲಿ ಇದಕ್ಕೆ ಸಂಬಂಧಿಸಿದ ಕೆಲವು ಶಾಸನಗಳನ್ನು ಕುತೂಹಲದಿಂದ ಪರಿಶೀಲಿಸಿವೆ.

ಕ್ರಿ. ಶ. ೧೫೫೪ರಲ್ಲಿ ವಾಣಿಜ್ಯವೈಶ್ಯ ನಗರದ ಶೆಟ್ಟಿಣ ಎಂದು ವರ್ಣಿಸಲ್ಪಟ್ಟ ಅಧಿಕಾರಿ ತಿಪ್ಪಿಶೆಟ್ಟಿಯ ಮಗ ಗಂಧದ ತಿಪ್ಪಿಶೆಟ್ಟಿಯು ವಿಠಲ ದೇವಾಲಯದ ಪ್ರಾಕಾರದೊಳಗೆ ಉತ್ತರಕ್ಕೆ ೪೪ ಅಂಕಣದ ಗುಡಿಯೊಂದನ್ನು ಕಟ್ಟಿಸಿದನೆನ್ನುತ್ತದೆ ಹಂಪಿಯ ಶಾಸನ.[1] ಇದು ತಿರುಕಚ್ಚಿ ನಂಬಿಯನ್ನೊಳಗೊಂಡಂತೆ ಹದಿಮೂರು ಆಳ್ವಾರುಗಳನ್ನು ಪ್ರತಿಷ್ಠಾಪಿಸಲೆಂದು ಕಟ್ಟಿಸಲ್ಪಟ್ಟದು. ಈ ಶಾಸನ ವಿಠಲನ ಆಲಯದ ಮಧ್ಯದ ಗುಡಿಯ ಪಶ್ಚಿಮದ ಗೋಡೆಯ ಅಡಿಪಾಯದ ಪೀಠದ ಮೇಲಿದೆ. ಆಳ್ವಾರರುಗಳು ಒಟ್ಟು ೧೨. ಇನ್ನೊಬ್ಬರು ತಿರುಕ್ಕಚ್ಚಿ ನಂಬಿ. ಇವರು ಶೈವನಂಬಿಯರು. ೬೪ ಶಿವಶರಣರಲ್ಲಿ ಪ್ರಮುಖರು. ಇಲ್ಲಿ ಇವರನ್ನು ಹೆಸರಿಸಿರುವುದೂ ಗಮನಾರ್ಹ.

ಹಜಾರರಾಮಸ್ವಾಮಿಯ ದೇವಾಲಯದಲ್ಲಿರುವ ತೆಲುಗು ಶಾಸನದಲ್ಲಿ ಆರವೀಡಿನ ವೆಂಗಳರಾಜುವು 'ರಾಮ ಚಂದ್ರುನಿ ಕೋವಿಲಲೋನ'–ರಾಮಚಂದ್ರಾಲಯದಲ್ಲಿ ಆಳ್ವಾರರ ಪ್ರತಿಷ್ಠೆ ಮಾಡಿದನೆಂದು ಶಾಸನ ತಿಳಿಸುತ್ತದೆ, ಎಂದಮೇಲೆ ದೇವಸ್ಥಾನದ ಒಳಗಡೆಯೇ ಗುಡಿ (?) ಯನ್ನು ಕಟ್ಟಿಸಿರಬಹುದು. ಕೊನೆಯಪಕ್ಷಕ್ಕೆ ದೇವಾಲಯದ ಭಿತ್ತಿಗಳಲ್ಲಿ ಆಳ್ವಾರರ ಚಿತ್ರಗಳನ್ನು ಕೆತ್ತಿಸಿರಬಹುದು. ಶಾಸನದಲ್ಲಿ ಕಾಲದ ನಿರ್ದೇಶನವಿಲ್ಲ.[2]

ವಿಠಲನ ಆಲಯದ ಸಮೀಪದಲ್ಲಿರುವ ಈಗ ಭಗ್ನವಾಗಿರುವ ಗುಡಿಯೊಂದರಲ್ಲಿ ಕ್ರಿ. ಶ. ೧೫೫೩ನೆಯ ವರ್ಷದ ಸದಾಶಿವರಾಯನ ಕಾಲದ ಶಾಸನವಿದೆ.[3] ಕಂಚುಮಹಾವಿನಕಟೆಯ ಹಿರಿಯ ಹಿಟುಬೋಗಿನ ಸ್ಥಳದಲ್ಲಿ ಹಿರಿಯ ತಿರುಮಲ ರಾಜಯ್ಯನು ೭ ಕೊಡಗೆ ಭೂಮಿ ೧೦೦ ವರಹಗಳಿಗೆ ಕಂಭಂಕಾಮಾದೀಕ್ಷಿತರಿಂದ ಪಡೆದನು. ಈ ಭೂಮಿಯನ್ನು ಇದಕ್ಕೂ ಮೊದಲು ಶ್ರೀಕೃಷ್ಣ ದೇವರಾಯನು ಮೋಮಣಜೋಯಿಸರ ಮಗ ರಂಗುಭಟ

---

* ಡಾ. ಬಾ. ರಾ. ಗೋಪಾಲ, ೩೮, ಜಾನಕಿ, ೪ನೇ ಮೈನ್, ಸರಸ್ವತಿಪುರಂ, ಮೈಸೂರು ೫೭೦೦೦೯

1 ಬಾ. ರಾ. ಗೋಪಾಲ (ed) : *Vijayanagara Inscription* Vol 1, K. N. 336 ; SII, ix (ii) No. 560.

2 *Vijayanagara Progress Report of 1983-84*, No. 61.

3 ಬಾ. ರಾ. ಗೋಪಾಲ (ಸಂ). ಪೂರ್ವೋಕ್ತ K N ೩೫೫.

ನಿಗೆ ದಾನ ಮಾಡಿದ್ದನು.[4] ವಾರ್ಷಿಕ ವರದಿಯಲ್ಲಿ ನೀಡಿರುವ ವರದಿಯಂತೆ ಕಂಭನ ದೀಕ್ಷಿತನು ಆರು ಮುಡಿ ಭೂಮಿಯನ್ನು ಆಳುವಾರ್ಯದೇವರಿಗೆ ದತ್ತಿಯಾಗಿ ನೀಡಿದ್ದನು. ಆದರೆ ಸಿ. ಎಸ್. ಪಾಟೀಲರು ಶಾಸನ ಪಾಠವನ್ನು ಭಿನ್ನವಾಗಿ ಓದಿದ್ದಾರೆ. ಕಂಭಂ ಕಾಮಾದೀಕ್ಷಿತನು ಪ್ರಥಪರತಿಯ ಲಿಂಗಂಭಟ್ಟನ ಮಗ. ಈತ ವಿಠಲದೇವರ ತೇರಿನ ಬಳಿಯಲ್ಲಿ ತಿರುಮಳಿಶೈ ಆಳುವಾರ ದೇವರಿಗೆ ಭೂಮಿಯನ್ನು ಧಾರೆಯನೆರೆದು ಕೊಟ್ಟನು.[5]

ಭಗ್ನವಾಗಿರುವ ಗುಡಿಯ ಪಕ್ಕದಲ್ಲಿನ ಇನ್ನೊಂದು ಶಾಸನದಲ್ಲಿ ತಿಕದಾಸರಿಯ ಮೊಮ್ಮಗ, ತಿಮ್ಮಯ್ಯನ ಮಗ ಸಾತಾನಿ ತಿರುಮಲಯ್ಯ ಶ್ರೀ ವಿಠಲದಲ್ಲಿ ಮೊದಲ ಆಳ್ವಾರರಿಗೆ ಆಲಯವೊಂದನ್ನು ಕಟ್ಟಿಸಿದ. ಪರಾಶರ ಭಟ್ಟ ಚಿಕ್ಕಯಾಚಾರ್ಯನ ಮೊಮ್ಮಗ ಪೆದ್ದಯಾಚಾರ್ಯನ ಮಗ ಚಿಕ್ಕಯಾಚಾರ್ಯನಿಗೆ ಮನೆಯ ನಿವೇಶನವೊಂದನ್ನು ದಾನವಾಗಿ ನೀಡಿದ. ಹನ್ನೆರಡು ಆಳ್ವಾರರುಗಳಲ್ಲಿ ಮೊದಲಿಗರೆಂದರೆ ಭೂತತ್ತಾಳ್ವಾರರು. ಆದರೆ ಇವರ ಬಗೆಗೇನೂ ತಿಳಿಯದು. ಅವರು ೧೦೦ ಪಾಶುರಗಳನ್ನು ರಚಿಸಿದ್ದಾರೆಂಬುದಷ್ಟು ಗೊತ್ತು. ಆದರೆ ನಮ್ಮಾಳ್ವಾರರು ಇವರುಗಳಲ್ಲಿ ಸುಪ್ರಸಿದ್ಧರು. ಬಹುಶಃ ಇವರಿಗೇ ಆಲಯವನ್ನು ಕಟ್ಟಿಸಿರಬೇಕು. ಈ ಶಾಸನದ ಕಾಲ ಕ್ರಿ. ಶ. ೧೫೫೯.[6]

ಕ್ರಿ. ಶ. ೧೫೫೫ನೆಯ ವರ್ಷದ ಶಾಸನದಲ್ಲಿ ಗುತ್ತವೊಳಲ ಸೀಮೆಯ ಹಂದಿಗನೂರು ಗ್ರಾಮವನ್ನು ಅಳಿಯ ರಾಮರಾಜನು ವಿಠಲನ ಸಮೀಪದ ನಮ್ಮಾಳ್ವಾರರ ಸೇವೆಗಾಗಿ ದಾನಮಾಡಿದನೆಂದು ಒಂದು ಶಾಸನ ತಿಳಿಸುತ್ತದೆ.[7]

ಇವುಗಳನ್ನು ಗಮನಿಸಿದಾಗ ವಿಠಲ ದೇವಾಲಯದ ಸಮೀಪದಲ್ಲಿರುವ ಈಗ ಭಗ್ನವಾಗಿರುವ ಗುಡಿಯಲ್ಲಿ ಆಳ್ವಾರರುಗಳ ವಿಗ್ರಹಗಳನ್ನು ಪ್ರತಿಷ್ಠಾಪಿಸಲಾಗಿತ್ತೆಂದೂ, ಬಹುಶಃ ಅದರಲ್ಲೊಂದಾದ ನಮ್ಮಾಳ್ವಾರರ ವಿಗ್ರಹ ಇತ್ತೀಚೆಗೆ ದೊರೆತಿರಬಹುದೆಂದೂ ಊಹಿಸಬಹುದಾಗಿದೆ. ಆ ವಿಗ್ರಹ ಪುರಂದರದಾಸರದ್ದಲ್ಲವೆಂದು ಖಚಿತವಾಗಿ ಹೇಳಬಹುದು.

ವಿಠಲ ದೇವಾಲಯದ ನಮ್ಮಾಳ್ವಾರು ಎಂಬವ, ದಿನಂಪ್ರತಿ ಪ್ರಾತಃ ಪೂಜೆಯ ನಂತರದ ದೇವರ ನೈವೇದ್ಯವನ್ನು ತನಗೆ ವಾದ್ಯ–ಸಂಗೀತಸಮೇತ ಕಳುಹಿಸುವುದಕ್ಕಾಗಿ ಭೂದಾನವೊಂದನ್ನು ಮಾಡಿದನೆಂದು ಇನ್ನೊಂದು ಶಾಸನ ತಿಳಿಸುತ್ತದೆ.[8] ಇದು ಕ್ರಿ. ಶ. ೧೫೬೩ರಲ್ಲಿ.

---

4 ಭಾರತೀಯ ಶಾಸನ ಇಲಾಖೆಯ ೧೯೭೫-೭೬ನೆಯ ವರ್ಷದ ವರದಿ, ಸಂಖ್ಯೆ ೯೭.

5 *Vijayanagara Progress Report of 1983-84,* No. 21.

6 *A R I E*, 1975-76, No. 98.

7 SII ix, pt II No. 657.

8 ಬಾ. ರಾ. ಗೋಪಾಲ (ಸಂ) ಪೂರ್ವೋಕ್ತ, K N ೩೬೩.